# 5

# ಅದ್ಭುತ ತ್ಯಾಗ

ಮತ್ತು

## ಇತರ ಕಿರುಗತೆಗಳು.

(೧೭ ಕಿರುಗತೆಗಳ ಸಂಗ್ರಹ)


ಸಂಗ್ರಾಹಕರು:

**ವೈದ್ಯಗುರು ಎಂ. ಆರ್. ಭಟ್,**

ಮಂಗಳೂರು.


ಬಾಳುವೆಯನ್ನು ಪುನೀತಗೊಳಿಸುವ, ಸದ್ವಿಚಾರಗಳನ್ನು ಪ್ರಚೋದಿಸಲು ಸಹಾಯಕವಾಗುವ ಉದ್ಬೋಧಕ ಕಥಾನಕಗಳು.


**1954**

ಒಂದಾಣೆ ಮಾಲೆ

# 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವ ಕೆಲವು ವಿಷಯಗಳು

| | |
|---|---|
| ಸಣ್ಣ ಕತೆಗಳು | ಪ್ರಹಸನಗಳು |
| ನೀಳ್ಗತೆಗಳು | ಏಕಾಂಕ ನಾಟಕಗಳು |
| ವ್ಯಕ್ತಿ ಚಿತ್ರ | ದೇಶ-ವಿದೇಶ ಚರಿತ್ರೆ |
| ವಿಜ್ಞಾನ | ಚಿಕ್ಕ ನಿಘಂಟುಗಳು |
| ಶಿಲ್ಪ | ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ |
| ಲಲಿತಕಲೆ | ಸೃಷ್ಟಿಯ ವೈಚಿತ್ರ್ಯಗಳು |
| ಗೃಹವೈದ್ಯ | ಶೈಕ್ಷಣಿಕ ವಿಚಾರಗಳು |
| ಗೃಹಿಣಿಯರಿಗೆ | ಕ್ಷೇತ್ರಗಳ ವಿವರ |
| ಉಪಯುಕ್ತ ಸಲಹೆಗಳು | |
| ಸುಭಾಷಿತ | ವಾಙ್ಮಯ ವಿಚಾರ |
| ಪ್ರಯಾಣ ಕತೆಗಳು | ಸತ್ಯ ಕಥಾನಕಗಳು |

ಶ್ರೀ| ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್, ವೈದ್ಯಗುರು ಎಂ. ಆರ್. ಭಟ್, ದಿ| ಎಮ್. ಎನ್. ಕಾಮತ್, ಶ್ರೀ| ಪಿ. ಎಸ್. ವೆಂಕಟಕೃಷ್ಣ ರಾವ್, ಎಂ.ಎ., ಬಿ.ಟಿ., ಶ್ರೀ| ಎಮ್. ಸುಬ್ರಾಯನ್, ವಿದ್ವಾನ್, ಶ್ರೀ| ಕುಡ್ಪಿ ವಾಸುದೇವ ಶೆಣೈ, ಶ್ರೀ| ಎಲ್. ಎಸ್. ನಾಯಕ, ಡಾ| ಎಸ್. ಪಿ. ಭಟ್– ಮೊದಲಾದವರ ಲೇಖನಗಳು 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವುವು.

ಕೆಲವು ಪ್ರಕಟಣೆಗಳು 32, 40, 48 ಅಥವಾ ಹೆಚ್ಚು ಪುಟಗಳಿರುವುವು. ಆದರೆ, ಯಾವ ಪ್ರಕಟಣೆಯೂ ಹದಿನಾರು ಪುಟಗಳಿಗಿಂತ ಕಡಿಮೆ ಇರುವುದಿಲ್ಲ.

## ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.

# ಅದ್ಭುತ ತ್ಯಾಗ

ಮತ್ತು

# ಇತರ ಕಿರುಗತೆಗಳು

........

## ೧. ಕಿಸಾನನ ಅದ್ಭುತ ತ್ಯಾಗ

ತ್ಯಾಗದ ವಿಷಯವಾಗಿ ಲೋಕದಲ್ಲಿ ನೂರಾರು, ಸಾವಿರಾರು— ಕಥೆಗಳಿವೆ. ಎಲ್ಲ ದೇಶಗಳು, ಅಲ್ಲಿಯ ಕೆಲವು ಅಸಾಧಾರಣ ಮನುಷ್ಯರ ಅದ್ಭುತ ತ್ಯಾಗಗಳ ಕಥೆಗಳನ್ನು ಗೌರವದಿಂದ ಹೇಳಬಲ್ಲವು. ತ್ಯಾಗಗಳು ಹಲವು ರೀತಿಯದ್ದಿವೆ, ಹಲವು ಕಾರಣಗಳಿಗಾಗಿ ಇರುತ್ತವೆ. ಜಪಾನ್ ದೇಶದ ಒಬ್ಬ ಕಿಸಾನನ ತ್ಯಾಗದ ಕಥೆಯು, ನಿಜಕ್ಕೂ 'ಅದ್ಭುತ'ವೆನಿಸುವಷ್ಟಕ್ಕಿದೆಯೆಂಬುದು, ಈ ಕೆಳಗಿನ ಸತ್ಯಕಥೆಯನ್ನೋದಿದಾಗ ತಿಳಿಯುವುದು.

ಜಪಾನಿನಲ್ಲಿ ಒಮ್ಮೆ ಭಯಾನಕ ಕ್ಷಾಮವು ತಲೆದೋರಿತು. ಬಲು ವಿಸ್ತಾರವಾದ ಪ್ರದೇಶದಲ್ಲಿ ಈ ದುಷ್ಕಾಲದ ಸಂಕಷ್ಟವು ಹರಡಿತು. ಜನರು ಸಾವಿರಗಟ್ಲೆಯಲ್ಲಿ ನಿತ್ಯವೂ ಹೊಟ್ಟೆಗಿಲ್ಲದೆ ಸತ್ತು ಬೀಳುತಿದ್ದರು.

ಅಲ್ಲಿಯ ಒಂದು ಊರಿನಲ್ಲಿ ಒಬ್ಬ ಕಿಸಾನ(ಬೇಸಾಯಗಾರ)ನೊಡನೆ, ಒಂದು ದೊಡ್ಡ ಚೀಲ ತುಂಬ ಭತ್ತವಿತ್ತು. ಆ ಊರಿನಲ್ಲಿ ಯಾರೊಡನೆಯೂ ಅಷ್ಟು ಭತ್ತವಿರಲಿಲ್ಲ. ಅಕ್ಕಿಯು ಜಪಾನಿನ ಮುಖ್ಯ ಆಹಾರ ಧಾನ್ಯವಾಗಿರುತ್ತದೆ. ಆ ಕಿಸಾನನು, ಇಚ್ಛಿಸಿದರೆ, ತನ್ನೊಡನೆ ಗುಪ್ತವಾಗಿರುವ ಆ ಭತ್ತದಿಂದ, ದಿನನಿತ್ಯಕ್ಕೆ ತನಗೆ ಬೇಕಾಗುವಷ್ಟು ಅಕ್ಕಿಯನ್ನು ತಯಾರಿಸಿಕೊಂಡು, ಊಟಮಾಡಿ, ಬಹು ದಿನಗಳ ತನಕ ಜೀವನ ನಿರ್ವಾಹಮಾಡಿಕೊಂಡು ಇರಬಹುದಿತ್ತು. ಆದರೆ, ಅವನು ಆ ಭತ್ತವನ್ನು ಮುಟ್ಟಲಿಲ್ಲ. ಬಹು 'ಕೃಪಣ'ನಾಗಿ ಅದನ್ನು, ಬಂಗಾರ

ಕ್ಕಿಂತಲೂ ಅಧಿಕ ಮೌಲ್ಯದ ವಸ್ತುವಾಗಿ ಪರಿಗಣಿಸಿ, ಜೋಪಾಸನ ವಾಗಿಟ್ಟನು.

ಕ್ಷಾಮವು, ನಿರ್ದಾಕ್ಷಿಣ್ಯವಾಗಿ ಜನರ ಬಲಿಗಳನ್ನು ತೆಗೆದುಕೊಳ್ಳುತ್ತ ಹೋಯಿತು. ಊರಿನಲ್ಲಿ ಯಾರೊಡನೆ ಅಲ್ಪ ಸ್ವಲ್ಪ ಭತ್ತವಿತ್ತೋ ಅದೆಲ್ಲವೂ ಸ್ವಲ್ಪ ಸ್ವಲ್ಪವಾಗಿ ಮುಗಿಯುತ್ತ ಹೋಯಿತು.

ದುಷ್ಕಾಲಕ್ಕೂ ಒಂದು ಮಿತಿಯಿದೆ; ಒಂದು ಅವಧಿಯಿದೆ. ಸಾವಿರಾರು ಜನರ ಆಹುತಿಪಡೆದ ನಂತರ ಕ್ಷಾಮವು ನಿಂತಿತು. ಅಳಿದುಳಿದವರು ಪುನಃ ಸಂತೋಷದ—ಸಮೃದ್ಧಿಯ—ದಿನಗಳನ್ನು ಎದುರುನೋಡುವ ಆಸೆ ಹಿಡಿದುಕೊಂಡರು.

ದೊಡ್ಡ ಗೋಣಿ ತುಂಬ ಭತ್ತವಿದ್ದ ಕಿಸಾನನು ಒಂದೆರಡು ದಿನ ಯಾರ ಕಣ್ಣಿಗೂ ಬೀಳಲಿಲ್ಲ. ಅವನನ್ನು ಬಲ್ಲ ಕೆಲವರು ಅವನನ್ನು ಹುಡುಕಿ, ಅವನ ಮನೆಯನ್ನು ಪ್ರವೇಶಿಸಿದರು. ಸದ್ದೇ ಇರಲಿಲ್ಲ. ಕೊನೆಗೆ, ಒಂದು ಕೋಣೆಯಲ್ಲಿ, ಒಂದು ದೊಡ್ಡ ಚೀಲದ ಮುಂದೆ, ಬಿದ್ದಿರುವ ಅವನ ಮೃತಶರೀರವನ್ನು ಕಂಡರು. ಚೀಲವನ್ನು ಪರೀಕ್ಷಿಸಲಾಗಿ ಅದರಲ್ಲಿ ಭತ್ತವಿದ್ದುದು ಕಂಡುಬಂತು.

"ಎಂಥ ಕೃಪಣ! ತಾನೂ ತಿಂದು ಬದುಕಲೆತ್ನಿಸಲಿಲ್ಲ—ಇತರರಿಗೂ ಕೊಡದೆ ಹೋದ! ಇವನಿಗಿಂತಲೂ ದೊಡ್ಡ ನೀಚರಿರಬಹುದೇ?" ಎಂದು, ಅಲ್ಲಿ ನೆರೆದವರು ಉದ್ಗಾರ ತೆಗೆದರು.

ಅಷ್ಟರೊಳಗೆ, ಅವನ ಶವದ ಬಳಿ ಒಂದು ಪತ್ರ ಬಿದ್ದುಕೊಂಡುದನ್ನು ಯಾರೋ ಹೆಕ್ಕಿದರು. ಕುತೂಹಲದಿಂದ ಎಲ್ಲರೂ ಪತ್ರದ ಕಡೆಗೆ ನೋಡಿದರು. ಅದರಲ್ಲಿ ಹೀಗೆ ಬರೆದಿತ್ತು:

"ನಾನು ಈ ಧಾನ್ಯವನ್ನು ತಿಂದರೆ ಅಥವಾ ಒಂದೆರಡು ಪ್ರಾಣಗಳನ್ನು ಉಳಿಸಲು ಇತರರಿಗೆ ಕೊಟ್ಟರೆ, ಬಹು ಬೇಗ ಮುಗಿದುಹೋಗುವುದು. ಕ್ಷಾಮವೆಂತೂ ಒಂದಲ್ಲ ಒಂದು ದಿನ ಕೊನೆಗೊಳ್ಳಲೇ ಬೇಕು. ಆಗ, ಮುಂದಿನ ವರ್ಷದ ಬೆಳೆಗೆ ಬೀಜವೇ ಇಲ್ಲದೆ ತಿರಿಗಿ ಸಾವಿರಾರು ಮಂದಿ ಉಪವಾಸ ಬಿದ್ದು ಸಾಯುವ ಅಪಾಯವು ಖಂಡಿತ. ಊರಿನಲ್ಲಿ ಯಾರೊಡನೆಯೂ ಬೀಜವಿರಲಾರದು. ಆದುದರಿಂದ, ಈ ಊರಿನ ಜನರು ಬೀಜ

ಕ್ಕಾಗಿ ಇದನ್ನು ಪಯೋಗಿಸಲಿ ಎಂದು ಅವರಿಗೆ ಬಿಟ್ಟುಬಿಟ್ಟಿದ್ದೇನೆ! ನಾನು ಅನಶನವ್ರತ ಕೈಕೊಂಡಿದ್ದೇನೆ!"

ಎಂಥ ಅದ್ಭುತ ತ್ಯಾಗ!

## ೨. ಉಪದೇಶಿಸುವ ಅಧಿಕಾರ

ಒಬ್ಬ ಬ್ರಾಹ್ಮಣನ ಎಂಟು ವರ್ಷ ಪ್ರಾಯದ ಹುಡುಗನಿಗೆ ಬೆಲ್ಲ ತಿನ್ನುವ ಮರುಳು ವಿಶೇಷವಾಗಿತ್ತು, ಕದ್ದು ತಿನ್ನುತಿದ್ದನು; ಕೇಳಿ ತಿನ್ನುತಿದ್ದನು; ಜಗಳಾಡಿ ತಿನ್ನುತಿದ್ದನು. ಹಾಗೆ ಬೆಲ್ಲ ತಿನ್ನಬಾರದೆಂದು ಎಷ್ಟು ವಿಧವಾಗಿ ತಿಳಿಸಿದರೂ ಪರಿಣಾಮವಾಗಲಿಲ್ಲ. ತಾಯ್ತಂದೆಗಳು ಬೆದರಿಕೆ ಹಾಕಿದರು; ಮಮತೆಯಿಂದ ತಿಳಿಸಿನೋಡಿದರು; ವಿನಂತಿಮಾಡಿದರು. ಆದರೆ, ಆ ಹುಡುಗನನ್ನು ಸರಿದಾರಿಗೆ ತರಲಾಗಲಿಲ್ಲ.

ಆ ಊರಿಗೆ ಒಬ್ಬ ಸಾಧು ಪುರುಷನು ಬಂದನು. ಈ ಸಾಧುವು, ಅಸಾಧಾರಣ ಶಕ್ತಿಯ ಮಹಾತ್ಮನು ಎಂಬ ಖ್ಯಾತಿ ಹರಡಿತ್ತು. ಬ್ರಾಹ್ಮಣನು, ತನ್ನ ಮಗನನ್ನು ಕರಕೊಂಡು ಆ ಮಹಾತ್ಮನ ಬಳಿಗೆ ಹೋಗಿ, ಹೀಗಂದನು: "ಮಹಾರಾಜ! ಈ ಹುಡುಗನು ದಿನಾಲೂ, ನಾಲ್ಕು ದುಡ್ಡಿನ ಬೆಲ್ಲ ತಿನ್ನುತ್ತಾನೆ. ಕೊಡದಿದ್ದರೆ ಜಗಳಾಡುತ್ತಾನೆ. ಕೃಪಾಪೂರಿತನಾಗಿ ನೀನು ಒಂದು ಉಪಾಯವನ್ನು ತೋರಿಸಬೇಕೆಂದು ಬೇಡಿಕೊಳ್ಳುತ್ತೇನೆ."

ಮಹಾತ್ಮನು, ಇದನ್ನು ಕೇಳಿ ಚಕಿತನಾದನು. ಆ ಮೇಲೆ ಒಂದೆರಡು ನಿಮಿಷ ಧ್ಯಾನಮಗ್ನನಾಗಿದ್ದು, ಆ ಮೇಲೆ ಆ ಬ್ರಾಹ್ಮಣನನ್ನು ಕುರಿತು, "ಒಂದು ಪಕ್ಷ (ಹದಿನೈದು ದಿನ) ಬಿಟ್ಟುಕೊಂಡು, ಹದಿನಾರನೇ ದಿನಕ್ಕೆ ಈ ಹುಡುಗನನ್ನು ಇಲ್ಲಿಗೆ ಕರತಂದರೆ, ನಾನು ಒಂದು ಉಪಾಯವನ್ನು ಸೂಚಿಸುವೆನು."

ಹದಿನೈದು ದಿನಗಳ ನಂತರ ಬ್ರಾಹ್ಮಣನು ಹುಡುಗನೊಂದಿಗೆ ಅಲ್ಲಿಗೆ ಬಂದನು. ಸಾಧುವು, ಆ ಹುಡುಗನನ್ನು ಕುಳ್ಳಿರಿಸಿ, ದೃಢಸ್ವರದಿಂದ–ಆದರೆ ಮಧುರವಾಗಿ—"ಬಾಲಕನೇ! ನೋಡು. ಇನ್ನು ಮುಂದೆ ಎಂದಾದರೂ ಬೆಲ್ಲವನ್ನು ತಿನ್ನಬೇಡ ಮತ್ತು ಜಗಳಾಡಬೇಡ!" ಹೀಗೆ ಹೇಳಿ, ಹುಡುಗನ ಬೆನ್ನು ತಟ್ಟಿ, ಕಳಿಸಿಕೊಟ್ಟನು.

ಆಶ್ಚರ್ಯವೇನೆಂದರೆ, ಆ ಹುಡುಗನು ಆ ದಿನದಿಂದ ಬೆಲ್ಲ ತಿನ್ನುವು ದನ್ನೂ ಜಗಳಾಡುವುದನ್ನೂ ಬಿಟ್ಟುಬಿಟ್ಟನು!

ಕೆಲದಿನಗಳ ತನಕ ಹುಡುಗನ ಈ ಅದ್ಭುತ ಪರಿವರ್ತನವನ್ನೆ ನೋಡಿಕೊಂಡಿದ್ದ ಬ್ರಾಹ್ಮಣನಿಗೆ ಒಂದು ವಿಧದ ಯೋಚನೆ ಹತ್ತಿತು. ಹುಡುಗನು ಬೆಲ್ಲ ಮುಂದಿಟ್ಟರೂ ಮುಟ್ಟಲೊಲ್ಲನು! ಏನಿದು? ಮಂತ್ರ ಮಾಟವೇ?

ಬ್ರಾಹ್ಮಣನು ಸಾಧು ಪುರುಷನ ಬಳಿಗೆ ಧಾವಿಸಿದನು.

"ಏನು ಬ್ರಾಹ್ಮಣ? ಏಕೆ ಬಂದೆ? ಹುಡುಗನು ಪುನಃ ಬೆಲ್ಲ ತಿನ್ನು ತ್ತಿಲ್ಲವಷ್ಟೆ?"—ಸಾಧು ಮಹಾಶಯನು ವಿಚಾರಿಸಿದನು.

"ಮಹಾರಾಜ! ಇಲ್ಲ! ಅವನಿಗೇನಾಗಿದೆ, ಹೇಳಬಲ್ಲಿರಾ?........ನಾವು ನಿತ್ಯವೂ ವಿನಂತಿಸಿಕೊಂಡರೂ ತನ್ನ ಚಟ ಬಿಡಲೊಲ್ಲದ ಬಾಲಕನು, ತಮ್ಮ ಒಂದೇ ಒಂದು ಮಾತಿನಿಂದ ಅಷ್ಟು ಅದ್ಭುತ ಮಾರ್ಪಾಟ ಹೊಂದಿರುವನಲ್ಲ!"

ಮಹಾತ್ಮನು ಹಸನ್ಮುಖನಾಗಿ ಹೇಳಿದನು: "ಬಂಧು! ಸ್ವಯಂ ಸಂಯಮ ನಿಯಮಗಳನ್ನು ಪರಿಪಾಲಿಸದವನು ಅನ್ಯರಿಗೆ ಸಂಯಮ ನಿಯಮಗಳನ್ನು ಉಪದೇಶಿಸುವ ಅಧಿಕಾರವುಳ್ಳವನಾಗಿಲ್ಲ. ಅಂಥವನ ಉಪದೇಶದಲ್ಲಿ ಶಕ್ತಿಯೂ ಇರುವುದಿಲ್ಲ. ನೀನು ಅಂದು ಬಂದಾಗ್ಗೆ, ನಾನೂ ಬೆಲ್ಲ ತಿನ್ನುವ ಹುಚ್ಚನಾಗಿದ್ದೆ. ಹುಡುಗನ 'ರೋಗ' ಕೇಳಿ ನಾನು ಚಕಿತನಾದೆ. ಆ ಹುಡುಗನಿಗೆ ಬೋಧಿಸುವ ಮೊದಲು ನನ್ನನ್ನೆ ನಾನು ಶುದ್ಧಪಡಿಸಿಕೊಳ್ಳಬೇಕಾಗಿತ್ತು; ಅದಕ್ಕಾಗಿ ಹದಿನೈದು ದಿನ ಬಿಟ್ಟು ಕೊಂಡು ಬರಲು ಹೇಳಿದೆ. ಆ ಅವಧಿಯಲ್ಲಿ ನಾನೇ ಬಲು ಕಷ್ಟದಿಂದ ಬೆಲ್ಲದ ಚಟವನ್ನು ಬಿಟ್ಟುಬಿಟ್ಟೆ. ಈ ಚಟವನ್ನು ಬಿಟ್ಟನಂತರ, ಮನಸ್ಸಿ ನಲ್ಲಿ ಉಂಟಾಗುವ ಇಚ್ಛಾಪ್ರಾಬಲ್ಯದ ವಿಷಯವನ್ನು ನಾನು ಸ್ವಯಂ ಒಂದು ಪಕ್ಷದ ವರೆಗೆ ಪರೀಕ್ಷಿಸಿದೆನು. ಬೆಲ್ಲ ತಿನ್ನಬಾರದ ನನ್ನ ಅಭ್ಯಾ ಸವು ದೃಢವಾದಾಗ ಮಾತ್ರ, ನಾನು ಉಪದೇಶಿಸುವುದಕ್ಕೆ ಅರ್ಹತೆ ಪಡೆದೆ ನೆಂದು ಖಚಿತಗೊಂಡೆನು. ಆ ಮೇಲೆ, ಪೂರ್ಣ ಮನೋಬಲದಿಂದ, ದೃಢತಾಪೂರ್ವಕ ನಿನ್ನ ಬಾಲಕನಿಗೆ, ತಿನ್ನಬಾರದೆಂದು ಉಪದೇಶಿಸಿದೆನು.

ಯಾವ ಮನುಷ್ಯನೂ ಇದೇ ರೀತಿ, ಅನ್ಯರಿಗೆ ಉಪದೇಶಿಸುವ ಅಧಿಕಾರ ವನ್ನೂ ಶಕ್ತಿಯನ್ನೂ ಹೊಂದಬಹುದು.”

ಮಹಾತ್ಮನ ಮಾತುಗಳನ್ನು ಕೇಳಿ, ಬ್ರಾಹ್ಮಣನು ಲಜ್ಜಿತನಾದನು; ಮತ್ತು ಅವನು ಸಹ, ಆ ದಿನದಿಂದ ಬೆಲ್ಲ ತಿನ್ನುವುದನ್ನು ಬಿಟ್ಟುಬಿಟ್ಟನು.

ದೃಢತೆ, ತ್ಯಾಗ, ಸಂಯಮ ಮತ್ತು ತದನುಕೂಲವಾದ ಆಚರಣೆ— ಈ ನಾಲ್ಕು ಏಕತ್ರವಾದಲ್ಲಿ ಸಫಲತೆಯಿದೆ.

........

## ೩. ಮುದುಕಿಯ ಸಣ್ಣ ಗುಡಿಸಲು

ದೇಶದ ಒಡೆಯ! ಮಹಾರಾಜ! ಅವನು ಬೆರಳೆತ್ತಿದರೆ ಲಕ್ಷ ಜನ ಏಳುವರು; ಬೆರಳೊತ್ತಿದರೆ ಲಕ್ಷ ಜನ ಕೆಳಗೆ ಬೀಳುವರು!

ಮಹಾರಾಜನಿಗೆ ಒಮ್ಮೆ ಒಂದು ಹೊಸ ಅರಮನೆ ಕಟ್ಟಿಸುವ ಮನಸ್ಸಾಯಿತು. ಒಳ್ಳೆಯ ಸ್ಥಳವನ್ನಾರಿಸಿಕೊಂಡು, ಅರಮನೆಯ ಕೆಲಸ ಆರಂಭಿಸಲ್ಪಟ್ಟಿತು.

ಅರಮನೆ ಕಟ್ಟಿ ಮುಗಿಯಿತು. ಈ ನೂತನ ಮಹಲಿನ ಸೊಬಗನ್ನು ಸಾವಿರಾರು ಜನರು ದೂರದಿಂದ ನೋಡಿ ಹೋಗುವರು.

ಅರಮನೆಯ ಮುಂದೆ, ಅನತಿದೂರದಲ್ಲಿ, ಓರ್ವಳು ಬಡ ಮುದು ಕಿಯ ಗುಡಿಸಲು ಇತ್ತು. ಆ ಅರಮನೆಗಾಗಿ ರಾಜನು ಸ್ಥಳವನ್ನಾರಿಸಿ ಕೊಳ್ಳುವ ಎಷ್ಟೋ ವರ್ಷಗಳ ಹಿಂದಿನಿಂದ ಆ ಮುದುಕಿಯು ಆ ಹರಕು ಗುಡಿಸಲಿನಲ್ಲಿ ವಾಸವಾಗಿದ್ದಳು.

ಒಮ್ಮೊಮ್ಮೆ, ಬಲವಾದ ಗಾಳಿ ಬೀಸಿತೆಂದರೆ, ಆ ಗುಡಿಸಲಿನಿಂದ ಹೊರಟ ಹೊಗೆಯು ಅರಮನೆಯ ಕಡೆಗೂ ಬೀಸುತಿತ್ತು. ಅರಮನೆ ಯವರು ಮೂಗು ಮುಚ್ಚುತಿದ್ದರು.

ರಾಜನು ನೋಡಿದನು. ರಮಣೀಯವಾಗಿ ಕಂಗೊಳಿಸುವ ಪ್ರದೇಶ ದಲ್ಲಿ, ಶೃಂಗರಿಸಲ್ಪಟ್ಟ ಅರಮನೆಯ ಮುಂದೆ, ಆ ಹೊಲಸು ಗುಡಿಸಲು! ಸುಂದರವಾದ ಮೈಮೇಲೆ ಒಂದು ಹುಣ್ಣು ಎದ್ದಂತೆ!

ಆ ಗುಡಿಸಲನ್ನು ಕಿತ್ತು ಒಯ್ಯಬೇಕೆಂದು ರಾಜಾಜ್ಞೆ ಹೊರಟಿತು! ರಾಜನ ಸಿಪಾಯಿಗಳು ಮುದುಕಿಯ ಬಳಿಗೆ ಹೋಗಿ, ರಾಜಾಜ್ಞೆ ತಿಳಿಸಿದರು. ಆದರೆ, ಮುದುಕಿಯು ಬೆದರಲಿಲ್ಲ. ಇಲ್ಲಿಂದ ಏಳಲಾರೆ ಎಂದಳು.

ರಾಜನು ಇದನ್ನು ಕೇಳುತ್ತಲೇ ಕೋಪದಿಂದ ಕಿಡಿಕಿಡಿಯಾದನು. ಏನಿದು, ಈ ಕೃಶ-ವೃದ್ಧ-ಜಂತುವಿನ ದರ್ಪ! "ಅವಳನ್ನು ಎಳೆದು ಕರೆ ತನ್ನಿರಿ!" ರಾಜನು ಗುಡುಗುಡಿಸಿದನು.

ದೂತರು, ಮುದುಕಿಯನ್ನು ರಾಜನ ಮುಂದೆ ಒಯ್ದು ಒಪ್ಪಿಸಿದರು. ರಾಜನು ಕೇಳಿದನು: "ಮುದುಕಿಯೇ, ನೀನು ನಿನ್ನ ಹೊಲಸು ಗುಡಿಸಲನ್ನು ಕಿತ್ತು ತೆಗೆಯಲಾರೆಯಾ! ನಾನೇ ತೆಗೆಸಬೇಕೆ? ನಿತ್ಯವೂ ನಾನು ಆ ಹೊಲಸು ಹುಣ್ಣನ್ನು ನೋಡಿ ನೋಡಿ ಮೂಗುಮುರಿದುಕೊಳ್ಳುತ್ತಿರುವೆನಲ್ಲ!"

ಮುದುಕಿಯು ಶಾಂತಳಾಗಿ ಉತ್ತರವಿತ್ತಳು: "ಪ್ರಭೋ! ಕೋಪಿಸಬೇಡ. ನೀನು ಸರ್ವಶಕ್ತನು. ಆದರೆ, ಒಂದು ವಿಷಯವನ್ನು ಹೇಳುತ್ತೇನೆ. ದರಿದ್ರೆಯಾದ ನಾನು, ಕೊಳಕಿನಲ್ಲೇ ವಾಸಿಸುತ್ತಿರುವ ನಾನು, ನಿತ್ಯವೂ ನಿನ್ನ ಸುಂದರ—ವೈಭವಯುಕ್ತ—ಸಿರಿವಂತ ಮಹಲನ್ನು ನೋಡಿ ಸಹಿಸುತ್ತಿರುವೆನಲ್ಲ! ನನ್ನ ಬಡ ಗುಡಿಸಲನ್ನು ನೋಡಿ ನೀನೂ ಸೈರಿಸಲೊಲ್ಲೆಯೇಕೆ?"

ಮಹಾರಾಜನು ಆ ಮಾತಿನಿಂದ ಸ್ತಂಭೀಭೂತನಾದನು. ಅವನು ಇಂದು ಒಂದು ಹೊಸ ತತ್ತ್ವವನ್ನು ಕಂಡುಕೊಂಡನು! ಲಜ್ಜಿತನಾಗಿ, ತಲೆಬಾಗಿ, ಮುದುಕಿಗೆ ಯಥೇಚ್ಛ ಧನವನ್ನು ಕೊಟ್ಟು ಸನ್ಮಾನಿಸಿ, ಮರ್ಯಾದಾಪೂರ್ವಕವಾಗಿ ಬೀಳ್ಕೊಟ್ಟನು.

## ೪. ದಯೆ

ಒಮ್ಮೆ ಅಮೇರಿಕದ ಅಧ್ಯಕ್ಷ ಲಿಂಕನನು ರಾಜಸಭೆಗೆ ಹೋಗುತಿದ್ದನು. ರಸ್ತೆಯಲ್ಲಿ ಒಂದು ಹಂದಿಯು ಕೆಸರಿನಲ್ಲಿಳಿದು, ಮೇಲಕ್ಕೆ ಬರಲಾರದೆ ಪೇಚಾಡುತಿದ್ದುದು ಕಂಡು ಬಂತು. ಅದು ಎಷ್ಟು ಯತ್ನ ಮಾಡುತಿತ್ತೋ ಅಷ್ಟು ಆ ಕೆಸರಲ್ಲಿ ಹೂತು ಹೋಗುತಿತ್ತು.

ಹಂದಿಯ ಆ ದಯಾಕರ್ಷಕ ದಶೆಯನ್ನು ಕಂಡು ಲಿಂಕನನು ಕರುಣೆಗೊಂಡನು. ತಾನು ಧರಿಸಿದ್ದ ವಸ್ತ್ರಗಳ ಸಹಿತ ಆ ಕೆಸರಲ್ಲಿ ಇಳಿದು, ಆ ಹಂದಿಗೆ ಮೇಲಕ್ಕೆ ಬರಲು ಸಹಾಯವಿತ್ತನು.

ಅಧ್ಯಕ್ಷನ ಬಟ್ಟೆಗಳಿಗೆ ತುಂಬ ಕೆಸರು ಅಂಟಿಕೊಂಡಿತು. ಮನೆಗೆ ಹಿಂದಿರುಗಿ ಬಟ್ಟೆಗಳನ್ನು ಬದಲಾಯಿಸೋಣವೆಂದರೆ, ಸಭೆಯ ಸಮಯ ಮೀರಿ ಹೋಗಿದೆ. ಅವನು ನೇರಾಗಿ ಸಭೆಗೆ ಹೋದನು.

ಸಭಾಸದನವು ಈ ವಿಚಿತ್ರ ಉಡುಪನ್ನು ನೋಡಿ ಚಕಿತವಾಯಿತು. ಅವರ ಪ್ರಶ್ನೆಗಳಿಗೆ ಅಧ್ಯಕ್ಷನು ಉತ್ತರವಾಗಿ, ದಾರಿಯಲ್ಲಿ ನಡೆದುದೆಲ್ಲ ವನ್ನೂ ವಿವರಿಸಿದನು. ಅವರೆಲ್ಲರೂ ಅದನ್ನು ಕೇಳಿ, ಅವನ ದಯಾ ಗುಣ ವನ್ನು ಕೊಂಡಾಡಿದರು. ಆಗ ಅಧ್ಯಕ್ಷನು, ಅವರನ್ನು ತಡೆದು ಹೀಗಂದನು:

"ನೀವು ವ್ಯರ್ಥ ನನ್ನ ಪ್ರಶಂಸೆ ಮಾಡುತ್ತಿರುವಿರಿ. ನನಗೆ ಹಂದಿಯ ಮೇಲೆ ಯಾವ ದಯೆಯೂ ಬರಲಿಲ್ಲ. ಅದು ದುಸ್ಸಾಧ್ಯ ಕೆಸರಲ್ಲಿ ಬಿದ್ದು ದನ್ನು ನೋಡಿ ನನಗೆ ದುಃಖವಾಯಿತು. ನನ್ನ ದುಃಖವನ್ನು ಹೋಗ ಲಾಡಿಸುವುದಕ್ಕೆನೇ, ಅದನ್ನು ನಾನು ಹೊರಗೆ ತೆಗೆದೆನು. ಹಂದಿಗೆ ನಾನು ಯಾವ ಉಪಕಾರವನ್ನೂ ತೋರಲಿಲ್ಲ. ನನ್ನ ಒಳ್ಳೇದನ್ನೆ ಮಾಡಿದೆ; ಸ್ವಕಲ್ಯಾಣವನ್ನು ಸಾಧಿಸಿದೆ. ಏಕೆಂದರೆ, ಅದನ್ನು ಹೊರಗೆ ತೆಗೆದೊಡನೆಯೇ ನನ್ನ ದುಃಖವು ಮಾಯವಾಯಿತು."

ಆ ಮಾತುಗಳು ಅರ್ಥಗರ್ಭಿತವಾಗಿವೆ. ಪ್ರಾಣಿಮಾತ್ರದ ದುಃಖ ದಿಂದ ದುಃಖಿತನಾದವನು, ತನ್ನನ್ನೇ ಆ ದುಃಖದಿಂದ ವಿಮೋಚಿಸುವ ಸ್ವಚೇಷ್ಟೆಯೇ ದಯೆಯೆಂದು ಕರೆಯಲ್ಪಡುತ್ತದೆ.

■■■■■■■■

## ೫. ಧೂಳಿನ ಮೇಲೆ ಧೂಳು ಹಾಕಿದರೆ ಲಾಭವೇನು?

ಚಂದ್ರ-ಚಂದು ಪತಿ-ಪತ್ನಿಯರಾಗಿದ್ದರು. ಬಡವರು, ಪ್ರಾಮಾಣಿ ಕರು; ತಮ್ಮ ಕಾಯಕಷ್ಟದ ಜೀವನದಲ್ಲಿ ತೃಪ್ತರು.

ಒಂದು ದಿನ ಅವರಿಬ್ಬರೂ ಕಟ್ಟಿಗೆ ತರಲು ಕಾಡಿಗೆ ಹೋಗುತಿದ್ದರು. ಪತಿಯು ಅವಳಿಗಿಂತ ಕೆಲವಂತರ ದೂರದಲ್ಲಿ ನಡೆದು ಹೋಗುತಿದ್ದನು. ರಸ್ತೆಯಲ್ಲಿ, ಚಂದ್ರನಿಗೆ ಕಾಲಿಗೆ ಏನೋ ಎಡವಿತು. ನೋಡುತ್ತಾನೆ,— ಚಿನ್ನದ ಮೊಹರುಗಳನ್ನು ತುಂಬಿದ ಚೀಲ! ಅದನ್ನು ನೋಡುತ್ತಲೇ ಅವನು, ಬೇಗಬೇಗನೇ ಅದರ ಮೇಲೆ ಧೂಳುಹಾಕಿ ಮುಚ್ಚಿಬಿಟ್ಟನು.

ಅಷ್ಟರೊಳಗೆ ಚಂದು ಅಲ್ಲಿಗೆ ತಲಪಿದಳು. ಅವನನ್ನುದ್ದೇಶಿಸಿ ಕೇಳಿದಳು: "ಏನು ಮಾಡುತ್ತಿರುವೆ?"

ಚಂದ್ರನು ಒಂದು ಕ್ಷಣ ಮೌನವಾಗಿದ್ದನು. ಮತ್ತೆ, ಅವಳ ಆಗ್ರಹದಿಂದ ವಿವರಿಸಿದನು: "ಚಿನ್ನದ ಮೊಹರುಗಳಿದ್ದುವು; ಅವುಗಳ ಮೇಲೆ ನಿನ್ನ ಮನಸ್ಸು ಬಿದ್ದು ಅದು (ಮನಸ್ಸು) ಕಲಂಕಿತವಾಗಬಹುದೆಂದು ಹೆದರಿ, ಅವುಗಳು ನಿನ್ನ ಕಣ್ಣಿಗೆ ಬೀಳಲಾರದಂತೆ ಧೂಳಿನಿಂದ ಮುಚ್ಚಿಬಿಟ್ಟೆ!"

ಚಂದು, ನಗುತ್ತ ಅಂದಳು: "ವ್ಹಾ, ಧೂಳಿನ ಮೇಲೆ ಧೂಳು ಹಾಕುವುದರಲ್ಲಿ ಲಾಭವೇನು? ಚಿನ್ನ ಮತ್ತು ಧೂಳು ಇವುಗಳೊಳಗೆ ಭೇದವೇನು? ನೀನೇಕೆ ವ್ಯರ್ಥಶ್ರಮದಿಂದ ಅದನ್ನು ಧೂಳಿನಿಂದ ಮುಚ್ಚಿದೆ?"

---------

## ೬. ನಾವೇರನ ಉಪದೇಶ

'ನಾವೇರ'ನೆಂಬ ಒಬ್ಬ ಅರಬ ಸಜ್ಜನನೊಡನೆ, ಒಂದು ಉತ್ತಮ ಕುದುರೆಯಿತ್ತು. 'ದಾಹರ'ನೆಂಬ ಒಬ್ಬ ಮನುಷ್ಯನು ಕೆಲವು ಒಂಟೆಗಳನ್ನು ಕೊಟ್ಟು, ಬದಲು ಆ ಕುದುರೆಯನ್ನು ತೆಗೆದುಕೊಳ್ಳಲು ಇಚ್ಛಿಸಿದನು. ಆದರೆ, ನಾವೇರನಿಗೆ ಆ ಕುದುರೆಯು ಬಹುಪ್ರಿಯವಾಗಿತ್ತು. ಆದ್ದರಿಂದ ಅವನು ಅದನ್ನು ಕೊಡಲೊಪ್ಪಲಿಲ್ಲ. ದಾಹರನ ಮನಸ್ಸೂ ಆ ಕುದುರೆಯಲ್ಲಿ ಬಹು ಆಕರ್ಷಿತವಾಗಿತ್ತು. ಇದರಿಂದ ಅವನು ಕುದುರೆಯನ್ನು ಹಸ್ತಗತ ಮಾಡುವ ಇನ್ನೊಂದು ಉಪಾಯವನ್ನು ಹುಡುಕಿತೆಗೆದನು.

ಒಂದು ದಿನ, ನಾವೇರನು ಆ ಕುದುರೆಯ ಸವಾರಿ ಮಾಡಿ, ಎಲ್ಲಿಗೋ ಹೊರಗೆ ಹೋಗುವವನಿದ್ದನು. ಇದನ್ನು ಮುಂಚಿತವಾಗಿಯೇ ಗೊತ್ತು ಮಾಡಿ, ದಾಹರನು ಮೋಸತಂತ್ರದಿಂದ ತನ್ನ ಮುಖಚರ್ಯೆಯನ್ನು ಬದಲಾಯಿಸಿ, ಜೀರ್ಣ ಚಿಂದಿಗಳನ್ನುಟ್ಟು, ಅದೇ ಮಾರ್ಗದ ಒಂದು ಕಡೆಯಲ್ಲಿ ಕುಳಿತುಕೊಂಡು, ಕೆಟ್ಟ ರೀತಿಯಿಂದ ಕೆಮ್ಮು ಕೇಕರಿಸಿದನು. ನಾವೇರನು ಅಲ್ಲಿಗೆ ತಲಪುವಾಗ ಕೆಮ್ಮುವ ಬಡವನನ್ನು ಕಂಡು, ಅವನಿಗೆ ದಯೆಯು ಬಂತು. ಮುಂದಿನ ಹಳ್ಳಿಯ ತನಕ ಮುಟ್ಟಿಸಲು ಅವನನ್ನು ಕುದುರೆಯ ಮೇಲೆ ಸವಾರಿ ಮಾಡಿಸಿ, ಕೆಳಗಿನಿಂದ ಸ್ವತಃ ನಾವೇರನು ನಡೆದುಕೊಂಡು ಹೋಗಹತ್ತಿದನು.

ಕುದುರೆಯನ್ನೇರಿ ಸವಾರಿ ಆರಂಭಿಸುತ್ತಲೇ, ದಾಹರನು ಚಬುಕು ಹೊಡೆದು ಕುದುರೆಯನ್ನು ವೇಗದಿಂದ ಹೊರಡಿಸಿದನು. ಮತ್ತೆ, ತನ್ನ ಸಹಜ ಸ್ವರದಿಂದ ನೈಜರೂಪವನ್ನು ಬಯಲುಪಡಿಸಿ ಹೇಳಿದನು: "ನಾವೇರ! ನೀನು ನನಗೆ ಸರಳ ವಿಧದಿಂದ ಕುದುರೆಯನ್ನು ಕೊಡಲಿಲ್ಲ; ಅದಕ್ಕಾಗಿ ನಾನು ಮೋಸದಿಂದ ಇದನ್ನು ಪಡೆದೆನು." ನಾವೇರನು, ದಾಹರನನ್ನು ಕರೆದು, ಹೀಗಂದನು: "ಬಂಧು! ಭಗವಂತನ ಇಚ್ಛೆಯಿಂದ ನೀನು ನನ್ನ ಮುದ್ದು ಕುದುರೆಯನ್ನು ತೆಗೆದುಕೊಂಡಿರುವಿ. ಆಗಲಿ. ಈ ಕುದುರೆಯನ್ನು ಬಹಳ ಒಳ್ಳೇ ರೀತಿಯಿಂದ ಸಾಕಿಕೊಂಡಿರು. ಆದರೆ, ಜಾಗರೂಕನಾಗಿರು! ನಿನ್ನ ಈ ವಂಚನೆಯನ್ನು ಅನ್ಯರಿಗೆ ಹೇಳಬೇಡ. ಅನ್ಯಥಾ ದೀನದುಃಖಿಗಳ ಹಾಗೂ ದರಿದ್ರ ಅಸಹಾಯಕರ ಮೇಲೆ ದಯೆಯನ್ನು ತೋರಿಸುವ ಜನರು ಸಂಶಯಗ್ರಸ್ತರಾಗುವರು. ಇದರಿಂದಾಗಿ, ಅನೇಕ ದರಿದ್ರರು ಸಹಾಯತೆಯಿಂದ ವಂಚಿತರಾಗಬಹುದು."

ನಾವೇರನ ಈ ಮಾತುಗಳಿಂದ ದಾಹರನು ಬಹು ನಾಚಿದನು. ಮತ್ತು ಅವನು ಅದೇ ಕ್ಷಣದಲ್ಲಿ ಹಿಂದೆ ಬಂದು, ಕುದುರೆಯನ್ನು ನಾವೇರನಿಗೆ ಒಪ್ಪಿಸಿ, ಅಂದಿನಿಂದ ಅವನೊಡನೆ ಸದಾ ಮಿತ್ರಭಾವದಿಂದ ಇರುತಿದ್ದನು.

ಒಬ್ಬನು ಒಂದು ವಂಚನೆಮಾಡಿ, ತನ್ನ ಆ ವಂಚನೆಯ 'ವಿಜಯ'ವನ್ನು ಇನ್ನೊಬ್ಬನೊಡನೆ ಹೇಳಿದರೆ—ಅದು ಊರುತುಂಬ ಹರಡಿ, ಜನರು ಒಬ್ಬರಿನ್ನೊಬ್ಬರ ವಿಷಯವಾಗಿ ಸಂಶಯಗ್ರಸ್ತರಾಗುವರು. ಪರಸ್ಪರ ಅವಿಶ್ವಾಸವು ಹೆಚ್ಚಿ, ಒಬ್ಬರಿಂದ ಇನ್ನೊಬ್ಬರಿಗೆ ಸಹಾಯವು ದೊರೆಯಲು ಕಷ್ಟವಾಗುವುದು. ವಂಚಕನು ಹೀಗೆ ಘೋರ ಪಾಪಿಯೇ ಆಗುವನು.

■■■■■■■■

## ೭. ಶಾಸ್ತ್ರಿಯ ಸಹನಶೀಲತೆ

ಪಂಡಿತ ವಿಶ್ವನಾಥ ಶಾಸ್ತ್ರಿಯವರು ಬಂಗಾಲದ ಪ್ರಸಿದ್ಧ ಪಂಡಿತರಾಗಿದ್ದರು. ಒಮ್ಮೆ ಒಂದು ವಿಷಯದ ಮೇಲೆ ಕೆಲವು ಪಂಡಿತರೊಡನೆ ಶಾಸ್ತ್ರೀಯ ಶಾಸ್ತ್ರಾರ್ಥ ನಡೆದಿತ್ತು. ವಿರುದ್ಧ ಪಕ್ಷದ ಅಪಜಯವು ಸಂಭವಿಸುವ ಸಮಯ ಆ ಪಕ್ಷದ ಒಬ್ಬ ಪಂಡಿತನು ಮೂಗು ಸೀರುತ್ತ,

ಶಾಸ್ತ್ರೀಜಿಯು ಮೈಮೇಲೆ ಹಾರಿಸಿದನು. ಶಾಸ್ತ್ರಿಯುವರು ಒಂದಿಷ್ಟೂ ಕಳ ವಳಿಸದೆ, ಶಾಂತವಾಗಿ ಎದ್ದು ಕೊಂಡು ಹೋಗಿ, ಮೈತೊಳೆದುಕೊಂಡು ಬಂದು, ಮುಗುಳ್ನಗೆಯಿಂದ ಹೀಗಂದರು: "ಕ್ಷಣಮಾತ್ರ ಇಂದು ಅಪ್ರಾಸಂಗಿಕ ವಿಷಯಾಂತರದ ವಿಷಯವು ನಡೆದುಹೋಯಿತು; ಈಗ ಇದನ್ನು ಮರೆಯಿರಿ. ಮುಂದರಿದು, ನಮ್ಮ ಮೂಲವಿಷಯದ ಮೇಲೆ ನಮ್ಮ ಧ್ಯಾನವನ್ನು ಕೊಡುವ."

ಶಾಸ್ತ್ರಿಜೀಯು ಈ ಸಹನಶೀಲತೆ ಮತ್ತು ಕ್ಷಮೆಗಳನ್ನು ಕಂಡು, ವಿರುದ್ಧ ಪಕ್ಷದವರು ಲಜ್ಜಿತರಾಗಿ, ತಮ್ಮ ಅಪಜಯವನ್ನು ಒಪ್ಪಿಕೊಂಡರು.

▪▪▪▪▪▪▪▪▪

# ೮. ಮೌನದ ಮೌಲ್ಯ

ಒಂದು ಮನೆಯಲ್ಲಿ ಸ್ತ್ರೀಪುರುಷರಿಬ್ಬರೇ ವಾಸಿಸಿದ್ದರು. ಒಂದು ದಿನ ಆ ಸ್ತ್ರೀಯು ನೆರೆಮನೆಯವಳೊಡನೆ ಹೀಗಂದಳು: "ಭಗಿನೀ! ನನ್ನ ಪತಿಯು ಸ್ವಭಾವವು ಬಹು ಸಿಟ್ಟಿನದ್ದಾಗಿದೆ. ಆಗಾಗ್ಗೆ ಅವನು ನನ್ನೊಡನೆ ಜಗಳಾಡುತ್ತಿರುವನು, ಮತ್ತು ಆ ರೀತಿಯಲ್ಲಿ ನಮ್ಮ ಸಿದ್ಧವಾದ ಅಡಿಗೆಯು ವ್ಯರ್ಥವಾಗುತ್ತಿರುವುದು."

ನೆರೆಮನೆಯವಳು ಹೀಗಂದಳು: "ಇದರಲ್ಲಿ ವಿಶೇಷವೇನಿದೆ? ಚಿಂತಿಸಬೇಡ. ನನ್ನೊಡನೆ ಒಂದು ಅಮೂಲ್ಯ ಹಾಗೂ ಪ್ರಶಸ್ತ ಔಷಧಿಯಿದೆ. ನಿನ್ನ ಪತಿಯು ನಿನ್ನೊಡನೆ ಜಗಳಾಡುವಾಗ, ನೀನು ಈ ಔಷಧಿಯನ್ನು ಬಾಯಿಗೆ ಹಾಕಿಬಿಡು. ಅದರಿಂದ ಅವನು ಸುಮ್ಮನಾಗುವನು."

ನೆರೆಮನೆಯವಳು, ಮದ್ದಿನ ಬಾಟಲಿಯನ್ನು ತುಂಬಿಸಿ, ತಂದು ಕೊಟ್ಟಳು.

ಆ ಸ್ತ್ರೀಯು, ಎರಡು ಮೂರು ಸಲ ಪತಿಯು ಕ್ರೋಧ ಸಮಯದಲ್ಲಿ ಔಷಧಿಯ ಪರೀಕ್ಷೆ ನಡೆಸಿದಳು ಮತ್ತು ಅವಳಿಗೆ ಒಳ್ಳೇ ಫಲವು ಲಭಿಸಿತು. ಆಗ ಅವಳು ನೆರೆಮನೆಯವಳೊಡನೆ ಹೀಗಂದಳು: "ಭಗಿನೀ! ನಿನ್ನ ಔಷಧಿಯು ಅತ್ಯಮೂಲ್ಯವಾದುದು. ಅದರಲ್ಲಿ ಜಾದೂ ತುಂಬಿದೆ. ಯಾವ ಯಾವ ಅದ್ಭುತ ಶಕ್ತಿಯ ಮೂಲಿಕೆ ಅಥವಾ ದ್ರವಗಳ ಮಿಶ್ರಣ

ದಿಂದ ಅದನ್ನು ತಯಾರಿಸುತ್ತಾರೆ, ಹೇಳುವೆಯಾ? ನಾನೂ ಅದನ್ನು ತಯಾರಿಸಲು ಶಕ್ತಳಾದೇನೇ?"

ನೆರೆಮನೆಯವಳು ಹಸನ್ಮುಖಳಾಗಿ ಹೇಳಿದಳು: "ಭಗಿನೀ! ಬಾಟಲಿಯೊಳಗೆ ಶುದ್ಧ ನೀರು ಮಾತ್ರ ಇತ್ತು. ಬೇರೇನೂ ಇರಲಿಲ್ಲ. ನಿನ್ನ ಮೌನವೇ ಕೆಲಸವನ್ನು ಸಾಧಿಸಿತು. ಬಾಯೊಳಗೆ ನೀನು ನೀರು ತುಂಬಿದ್ದರಿಂದ ನಿನ್ನ ಪತಿಯು ಕ್ರೋಧದ ನುಡಿಗಳಿಗೆ ಪ್ರತ್ಯುತ್ತರ ಕೊಡಲಾಗಲಿಲ್ಲ. ನೀನು ಆ ರೀತಿ ಶಾಂತಳಾಗಿದ್ದುದರಿಂದ ಅವನ ಕ್ರೋಧವು ಸಹ ನಾಶವಾಯಿತು. ಒಂದು ಮೌನವು ಸಕಲ ದುಃಖಗಳನ್ನು ನಿವಾರಿಸುತ್ತದೆ. ಎದುರಾಳಿಯು ಮಾತಾಡುವುದಿಲ್ಲವಾದರೆ, ಕೋಪವು ತನ್ನಷ್ಟಕ್ಕೆ ಮಾಯವಾಗುತ್ತದೆ."

▪▪▪▪▪▪▪▪▪

## ೬. ಏಕನಾಥಜೀಯ ಅಕ್ರೋಧ

ಪೈಠಣದ ಕೆಲವು ದುಷ್ಟರು ಕೂಡಿ, ಘೋಷಣೆಮಾಡಿದರು: ಏಕನಾಥ ಮಹಾರಾಜರನ್ನು ರೇಗಿಸಿದವನಿಗೆ ಇನ್ನೂರು ರೂಪಾಯಿ ಬಹುಮಾನ ಕೊಡಲ್ಪಡುವುದು.

ಒಬ್ಬ ಬ್ರಾಹ್ಮಣಯುವಕನು ಆ ಶರ್ತಕ್ಕೆ ಕೈಕೊಟ್ಟನು. ಮರುದಿನ ಪ್ರಾತಃಕಾಲ ಅವನು ಏಕನಾಥಜೀಯ ಮನೆಯನ್ನು ಸೇರಿದನು. ಆಗ ಏಕನಾಥಜೀಯು ಪೂಜೆಮಾಡುತ್ತಲಿದ್ದರು. ಕೈಕಾಲುಗಳನ್ನು ತೊಳೆಯದೆ, ಮನೆಯ ಯಾರನ್ನೂ ಕೇಳದೆ, ಯುವಕನು ನೆಟ್ಟಗೆ ಪೂಜೆಯ ಕೋಣೆಯನ್ನು ಪ್ರವೇಶಿಸಿ, ಏಕನಾಥಜೀಯ ತೊಡೆಗಳ ಮೇಲೆ ಕುಳಿತುಕೊಂಡನು. ಹೀಗೆ ಮಾಡುವುದರಿಂದ ಏಕನಾಥಜೀಯು ಕ್ರೋಧವಶರಾಗುವರೆಂದು ಅವನು ಭಾವಿಸಿದ್ದನು.

ಆದರೆ, ಏಕನಾಥಜೀಯು ಮಂದಹಾಸದಿಂದ ಅಂದರು: "ಗೆಳೆಯಾ! ನಿನ್ನನ್ನು ನೋಡಿ ನನಗೆ ಬಹು ಆನಂದವಾಯಿತು. ನಿನ್ನಂತೆ ಜಗತ್ತಿನಲ್ಲಿ ಅನೇಕರಿರುವರು. ಆದರೆ, ನಿನ್ನ ಪ್ರೇಮವು ವಿಲಕ್ಷಣವಾಗಿದೆ."

ಆ ಯುವಕನು ನೋಡುತ್ತಲೇ ಇದ್ದನು. ಏಕನಾಥಜೀಯಲ್ಲಿ ಕ್ರೋಧವನ್ನುಂಟುಮಾಡುವುದು ಕಠಿನವೆಂದು ಅವನಿಗನಿಸಹತ್ತಿತು.

ಆದರೂ, ಇನ್ನೂರು ರೂಪಾಯಿಯ ಲೋಭವು ಕಾಡುತಿತ್ತು. ಕ್ರೋಧ ವೆಬ್ಬಿಸುವ ಕಠಿನ ಕೆಲಸವಾವುದೆಂದು ಆಲೋಚಿಸಹತ್ತಿದನು.

ಭೋಜನಕಾಲವು ಸಮೀಪಿಸಿತು. ಏಕನಾಥಜೀಯ ಬಳಿಯಲ್ಲೇ ಆ ಯುವಕನಿಗೆ ಮಣೆ ಹಾಕಿದ್ದರು. ಏಕನಾಥಜೀಯ ಧರ್ಮಪತ್ನಿಯು ಭೋಜನ ಬಡಿಸಿ, ತುಪ್ಪವನ್ನು ತಂದು, ಆ ಬ್ರಾಹ್ಮಣ ಯುವಕನ ತೊವ್ವೆಯ ಮೇಲೆ ಬಗ್ಗಿ ಬಡಿಸುತ್ತಿರಲು, ಯುವಕನು ಫಕ್ಕನೆ ಅವಳ ಗದ್ದುಗೆಯಲ್ಲಿ ಹೋಗಿ ಬಿದ್ದನು. ಆದನ್ನು ನೋಡಿ ಏಕನಾಥಜೀ ಹೀಗಂದರು: "ಪ್ರಿಯೇ! ನೋಡು, ಈ ಬ್ರಾಹ್ಮಣನು ಎಲ್ಲಿಯಾದರೂ ಬೀಳಬಾರದು!"

ಗಿರಿಜಾಬಾಯಿಯು, ಏಕನಾಥಜೀಗೆ ಸರ್ವವಿಧದಿಂದಲೂ ಒಪ್ಪುವ ಅರ್ಧಾಂಗಿಯಾಗಿದ್ದಳು. ಅವಳು ಮುಗುಳ್ನಗೆಯಿಂದಲೇ ಹೇಳಿದಳು: "ಭಯಪಡುವ ವಿಷಯವೇನೂ ಇಲ್ಲ. ನನಗೆ ಹರಿ (ಏಕನಾಥಜೀಯ ಪುತ್ರನ ಹೆಸರು)ಯನ್ನು ಪೀಠದ ಮೇಲೆ ಹೇರಿ, ಕಟ್ಟಿರಿಸಿ ಮನೆಗೆಲಸಗಳನ್ನು ಮಾಡುವ ಅಭ್ಯಾಸವಿದೆ. ಈ ಮಗುವನ್ನು ನಾನು ಹೇಗೆ ಬೀಳಿಸಲಿ?"

ಇದನ್ನು ಕೇಳಿ ಬ್ರಾಹ್ಮಣ ಯುವಕನ ಎಲ್ಲ ಆಶೆಗಳು ಇಂಗಿ ಹೋದುವು. ಅವನು ಥಟ್ಟನೆದ್ದು, ಏಕನಾಥಜೀಯ ಚರಣಗಳ ಮೇಲೆ ಬಿದ್ದು, ಕ್ಷಮೆಯನ್ನು ಕೋರಿದನು.

■■■■■■■■

## ೧೦. ನಾಯಿಯು ಶ್ರೇಷ್ಠನೋ ಅಥವಾ ಮನುಷ್ಯನೊ?

ಒಬ್ಬ ಮಹಾತ್ಮನು ಒಂದು ಕಡೆಯಲ್ಲಿ ಕುಳಿತಿದ್ದನು. ಅವನ ಸಮೀಪ ಒಂದು ನಾಯಿಯು ಬಂದು ಕುಳಿತುಕೊಂಡಿತು. ಒಬ್ಬ ಅಸಭ್ಯ ಮನುಷ್ಯನು ಅದನ್ನು ನೋಡಿ, ಕುಚೋದ್ಯ ಮಾಡುವ ಉದ್ದೇಶದಿಂದ, ಆ ಮಹಾತ್ಮನನ್ನುದ್ದೇಶಿಸಿ, ಹೀಗೆಂದನು: "ನಿಮ್ಮಿಬ್ಬರಲ್ಲಿ (ಮನುಷ್ಯ ಮತ್ತು ನಾಯಿ) ಶ್ರೇಷ್ಠ ಯಾರು?"

ಮಹಾತ್ಮನು ಕೂಡಲೇ ಉತ್ತರವಿತ್ತನು: "ಪ್ರಭುವಿನ ಸೇವೆಗೋಸ್ಕರ ನಾನು ಸತ್ಕರ್ಮ ಮಾಡುತ್ತಿದ್ದರೆ ನಾನು ಶ್ರೇಷ್ಠನು. ಅನ್ಯಥಾ ನಾನು ಭೋಗವಿಲಾಸದಲ್ಲಿ ಜೀವನವನ್ನು ವ್ಯಯಿಸುವುದಾದರೆ, ನನ್ನಂತಹ ನೂರಾರು ಮನುಷ್ಯರಿಗಿಂತ ಈ ನಾಯಿಯೇ ಶ್ರೇಷ್ಠವಾಗಿದೆ."

■■■■■■■■

# ೧೧. ಬಯ್ಯುವ ಬ್ರಾಹ್ಮಣ

ಒಬ್ಬ ಬ್ರಾಹ್ಮಣನ ಓರ್ವ ಸಂಬಂಧಿಯು ಭಗವಾನ್ ಬುದ್ಧನ ಶಿಷ್ಯ ನಾಗಿದ್ದನು. ಇದರಿಂದ ಆ ಬ್ರಾಹ್ಮಣನಿಗೆ ಬಹು ದುಃಖವಾಯಿತು. ಒಂದು ದಿನ ಅವನು ಬುದ್ಧದೇವನನ್ನು ಸಮೀಪಿಸಿ, ಯಥೇಷ್ಟ ಬಯ್ದನು. ಬುದ್ಧದೇವನು ಶಾಂತಭಾವದಿಂದ—ಮೌನವಾಗಿ ಆಲಿಸಿದನು. ಬ್ರಾಹ್ಮಣನು ಬಯ್ದು ಬಯ್ದು, ಕಟ್ಟಕಡೆಗೆ ದಣಿದು, ಸುಮ್ಮನಾದನು.

ಬ್ರಾಹ್ಮಣನು ಶಾಂತವಾದೊಡನೆ, ಭಗವಾನ್ ಬುದ್ಧನು ಹೀಗೆಂದು ಕೇಳಿದನು: "ಎಲೇ ಗೆಳೆಯ! ಎಂದಾದರೂ ನಿನ್ನ ಮನೆಗೆ ಅತಿಥಿಗಳು ಬರುತ್ತಾರೆಯೋ?"

ಬ್ರಾಹ್ಮಣನಂದನು: "ಅಹುದು."

ಬುದ್ಧ: "ಅವರಿಗೆ ನೀನು ಅನ್ನಪೇಯಾದಿ ವಸ್ತುಗಳನ್ನು ಕೊಡು ತ್ತಿರುವೆಯಾ?"

ಬ್ರಾಹ್ಮಣ: "ಅಹುದು."

ಬುದ್ಧದೇವನು ಇನ್ನೊಮ್ಮೆ ಕೇಳಿದನು: "ನಿನ್ನ ಆ ಅತಿಥಿಗಳು, ನೀನು ಕೊಟ್ಟ ಆ ವಸ್ತುಗಳನ್ನು ಸ್ವೀಕರಿಸದೆ ಇದ್ದರೆ ನೀನು ಏನು ಮಾಡುವಿ?"

"ಅದನ್ನು ಕೇಳುವ ಆವಶ್ಯಕತೆ ಏನಿದೆ? ಅತಿಥಿಗಳು ಸ್ವೀಕರಿಸದೆ ಇದ್ದರೆ, ನನ್ನ ವಸ್ತುಗಳು ನನ್ನ ಮನೆಯಲ್ಲೇ ಇರುವವು"—ಬ್ರಾಹ್ಮಣ ನಂದನು.

ಭಗವಾನ್ ಬುದ್ಧನು ಹೇಳಿದನು: "ಗೆಳೆಯಾ, ಸಾಕು ಸಾಕು! ಅದೇ ರೀತಿಯಲ್ಲಿ, ನೀನು ನನಗೆಂದು ಉಚ್ಚರಿಸಿದ ಬಯ್ಗಳು ನನ್ನಿಂದ ಸ್ವೀಕೃತವಾಗಲಿಲ್ಲ. ನಾನು ನಿನ್ನ ಮೇಲೆ ಕೋಪಗೊಂಡಿದ್ದರೆ, ನಿನ್ನ ಬಯ್ಗಳಿಗೆ ಪ್ರತಿಯಾಗಿ ಬಯ್ಯುತಿದ್ದೆನು. ನಿನ್ನ ಬಯ್ಗಳನ್ನು ನಾನು ಸ್ವೀಕರಿಸಲಿಲ್ಲ. ಆದುದರಿಂದ ಸುಮ್ಮನೆ ಕುಳಿತುಕೊಂಡೆನು. ನಿನ್ನ ಬಯ್ಗಳ ಉಪಹಾರವು ನಿನ್ನೊಡನೆಯೇ ಇರುತ್ತದೆ."

ಬ್ರಾಹ್ಮಣನು ಲಜ್ಜಿತನಾಗಿ, ವಿವೇಕ ತಾಳಿ ಭಗವಾನ್ ಬುದ್ಧನ ಶಿಷ್ಯನಾದನು.

## ೧೨. ರೋಗಾವಸ್ಥೆಯಲ್ಲಿಯೂ ಭಗವತ್ಕೃಪೆ

ಶ್ರೀ! ಅಶ್ವಿನೀ ಕುಮಾರದತ್ತನ ಗುರುವಿನ ಹೆಸರು 'ರಾಜನಾರಾಯಣಬಸು.' ರಾಜನಾರಾಯಣನು ಭಗವದ್ವಿಶ್ವಾಸೀ ಭಕ್ತನಾಗಿದ್ದನು. ಜೀವನದ ಉತ್ತರಾರ್ಧದ ದಿನಗಳಲ್ಲಿ ಅವನ ಒಂದು ಕೈಯು ಪಕ್ಷವಾತದಿಂದ ಪೀಡಿತವಾಗಿತ್ತು. ಅವನು ರಾಜಗೃಹದಲ್ಲಿ ಇರುತಿದ್ದನು.

ಅಶ್ವಿನೀ ಕುಮಾರನು ಅವನ ದರ್ಶನಾರ್ಥ ಹೋದನು. ಗುರುವಿನ ಅಸ್ವಾಸ್ಥ್ಯದ ಕಾರಣ, ಗಂಭೀರ ಹಾಗೂ ಉದಾಸೀನನಾಗಿ ಅವನು ಕೊಠಡಿಯನ್ನು ಪ್ರವೇಶಿಸಿದನು. ಅಶ್ವಿನೀ ಕುಮಾರನನ್ನು ನೋಡಿದೊಡನೆ ರಾಜನಾರಾಯಣನು ಪ್ರಸನ್ನನಾದನು. ಹಾಗೂ, "ಅಶ್ವೀನೀ! ಬಹು ದಿನಗಳ ನಂತರ ನೀನು ಬಂದಿರುತ್ತೀ. ಬಾ, ಬಾ!"–ಎಂದು ಹೇಳುತ್ತ,–ಬಳಿಗೆ ಬಂದ ಅಶ್ವಿನಿಯನ್ನು ಒಂದೇ ಕೈಯಿಂದ ಆಲಿಂಗಿಸಿದನು. ಇನ್ನೊಂದು ಕೈಯು ಪಕ್ಷವಾತದಿಂದ ಪೀಡಿತವಾಗಿತ್ತು.

ಅನಂತರ ರಾಜನಾರಾಯಣನು ಮಹಾತ್ಮರ ವಾಣಿ, ಗೀತಾ, ಉಪನಿಷತ್ತು ಮಂತ್ರಗಳನ್ನು ಹೇಳಲಾರಂಭಿಸಿದನು. ಎಲ್ಲಿಯಾದರೂ ದುಃಖದ ಉಲ್ಲೇಖವೇ ಇರಲಿಲ್ಲ. ಬಹಳ ಆನಂದವು ಹಬ್ಬಿತ್ತು.

ಒಂದು ಪ್ರಹರ ಕಳೆಯಿತು. ಅಶ್ವಿನೀ ಕುಮಾರನು ಹೊರಟು ಹೋಗಲು ಆಜ್ಞೆ ಕೇಳಿ ಹೀಗಂದನು: "ನಿನ್ನ ಸ್ವಾಸ್ಥ್ಯವು ಕೆಟ್ಟಿದೆಯೆಂದು ಕೇಳಿ, ನಾನು ನಿನ್ನನ್ನು ನೋಡಲು ಬಂದಿದ್ದೆ. ನನ್ನ ಮನಸ್ಸಿನಲ್ಲಿ ಬಹು ಉದಾಸೀನತೆಯಿತ್ತು. ಆದರೆ, ಇಲ್ಲಿ ನಾನು ಬೇರೇ ಸ್ಥಿತಿಯನ್ನು ಕಂಡೆನು. ಇಲ್ಲಿ ದುಃಖವೇ ಇಲ್ಲ. ನೀನು ಮೂರು ತಿಂಗಳುಗಳಿಂದ ಹಾಸಿಗೆಹಿಡಿದು ಇರುತ್ತಿ, ಆದರೆ, ನಿನಗೆ ದುಃಖದ ಅನುಭವವು ಎಳ್ಳಷ್ಟಾದರೂ ಉಂಟಾಗುವುದಿಲ್ಲವಲ್ಲ!"

ಅಶ್ವೀನಿ ಕುಮಾರನ ಮಾತನ್ನು ಕೇಳಿ, ರಾಜನಾರಾಯಣನು ಹಸನ್ಮುಖನಾಗಿ ಹೀಗಂದನು: "ಅಶ್ವಿನೀ, ನೋಡು. ನಾನು ಮುದುಕನಾಗಿದ್ದೇನೆ! ಭಗವಾನನ ಕೃಪೆಯಿಂದ ಇಂದಿನ ತನಕ ಬಹು ಸುಂದರ ದೃಶ್ಯಗಳನ್ನು ನೋಡಿದೆನು. ಬಹು ಸುಂದರ ಸುಖ ಆರಾಮಗಳನ್ನು ಅನುಭವಿಸಿದೆನು. ಈಗ ಆತನ ಕೃಪೆಯಿಂದಲೇ ಸ್ವಲ್ಪ ಸಮಯ ರೋಗಶಯ್ಯೆಯ

ಮೇಲೆ ಮಲಗುವುದರಿಂದ ನಾನು ಪ್ರಸನ್ನನಾಗಬಾರದೇಕೆ? ಭಗವತ್ಕೃಪೆಯು ಯಾವ ರೂಪದಿಂದಲೂ ಬರಲಿ,–ಎರಡೂ ಸ್ವರೂಪಗಳು ಆತನದ್ದೇ ಅಲ್ಲವೇ?"

........

## ೧೩. ಈಜಲು ತಿಳಿದಿರುವಿರಾ?

ಒಬ್ಬ ನವಶಿಕ್ಷಿತ ಪೌರ ಯುವಕನು ನದಿಯಲ್ಲಿ, ದೋಣಿಯ ಮೇಲೆ ಹೋಗುತಿದ್ದನು. ಆಕಾಶವನ್ನು ದಿಟ್ಟಿಸಿ ನೋಡುತ್ತ ಅವನು ನಾವಿಕನೊಡನೆ ಹೀಗಂದನು: "ಗೆಳೆಯನೇ, ನೀನು ನಕ್ಷತ್ರ ವಿದ್ಯೆಯನ್ನು ಅರಿತಿರುವಿಯಾ?"

ನಾವಿಕನೆಂದನು: "ಸ್ವಾಮಿ, ನಾನು ಅದರ ಹೆಸರನ್ನು ಕೂಡ ಅರಿಯೆನು."

ಕೂಡಲೇ ಯುವಕನು ಅಪಹಾಸ್ಯದಿಂದ ಹೀಗೆ ಹೇಳಿದನು: "ಹಾಗಾದರೆ, ನಿನ್ನ ಕಾಲಂಶ ಜೀವನವು ವ್ಯರ್ಥ ಗತಿಸಿತು."

ಸ್ವಲ್ಪ ಸಮಯದ ನಂತರ, ಯುವಕನು ಹೀಗೆ ಪ್ರಶ್ನಿಸಿದನು: ಅಂಬಿಗ! ನೀನು ಗಣಿತ ಶಾಸ್ತ್ರವನ್ನು ಓದಿದ್ದಿಯಾ?"

ನಾವಿಕನು ಉತ್ತರವಿತ್ತನು: "ಸ್ವಾಮಿ, ನಾನದನ್ನು ಕಲಿತಿಲ್ಲ."

ಯುವಕನಂದನು: "ಹಾಗಾದರೆ, ನಿನ್ನ ಅರ್ಧ ಜೀವನವು ವ್ಯರ್ಥವಾಯಿತು!"

ಬಡ ನಾವಿಕನು ಸುಮ್ಮನಿದ್ದನು. ಸ್ವಲ್ಪ ವೇಳೆಯ ನಂತರ ನದಿಯ ಎರಡೂ ತಲೆಗಳಲ್ಲಿದ್ದ ವೃಕ್ಷ ಸಮೂಹಗಳನ್ನು ಕಂಡು, ಯುವಕನು ಹೀಗೆಂದನು: "ಗೆಳೆಯಾ! ನೀನು ವೃಕ್ಷ ವಿಜ್ಞಾನ ಶಾಸ್ತ್ರವನ್ನು ಅರಿತಿರುವಿಯಾ?" ನಾವಿಕನು ಹೀಗೇಂದು ಉತ್ತರ ಕೊಟ್ಟನು: "ಸ್ವಾಮಿ, ಇಂತಹ ಶಾಸ್ತ್ರವನ್ನು ನಾನು ಎಲ್ಲಿಂದ ಕಲಿಯಬೇಕು? ದೋಣಿಯನ್ನು ನಡಿಸಿ, ಈ ರೀತಿಯಲ್ಲಿ ಹೊಟ್ಟೆ ತುಂಬಿಸಿಕೊಳ್ಳುತಿದ್ದೇನೆ."

ಯುವಕನು ಅಪಹಾಸ್ಯದಿಂದ ಹೀಗೆಂದನು: "ಹಾಗಾದರೆ, ಗೆಳೆಯಾ! ನಿನ್ನ ಮುಕ್ಕಾಲಂಶ ಜೀವನವು ವ್ಯರ್ಥವೇ ಕಳೆಯಿತು!"

ಹೀಗೆ ಸಂಭಾಷಣೆ ನಡೆಯುತ್ತಿರಲು, ಅಕಸ್ಮಾತ್ ಭರದ ಕತ್ತಲು ತುಂಬಿತು. ತುಫಾನು ಎದ್ದಿತು. ದೋಣಿಯು ಎತ್ತರಕ್ಕೇರಿ ಬೀಳತೊಡಗಿತು. ದೋಣಿಯೊಳಗೂ ನೀರು ಬಂದು, ತುಂಬಲಾರಂಭಿಸಿತು. ನಾವಿಕನು ನೀರಿಗೆ ಹಾರಿ, ಈಜುತ್ತಿರುತ್ತ, ಪ್ರಶ್ನಿಸಿದನು: "ಸ್ವಾಮಿ, ನೀವು ಈಜಲು ತಿಳಿದಿರುವಿರಾ?"

ದಿಗಿಲುಗೊಂಡ ಯುವಕನು, "ಇಲ್ಲ! ಈಜು ತಿಳಿದಿದ್ದರೆ ನದಿಗೆ ದುಮುಕುತಿದ್ದೆನು. ಗೆಳೆಯಾ, ಈಗ ಏನಾಗುವುದು? ಏನು ಮಾಡಲಿ, ಹೇಳು!"—ಎಂದು ಕೂಗಿದನು.

ನಾವಿಕನಂದನು: "ಈಗ, ಮುಳುಗಿ ಸಾಯುವ ಹೊರತು ಅನ್ಯ ಉಪಾಯವಿಲ್ಲ. ನೀವು ತಿಳಿದಿರುವ ಸಕಲ ವಿದ್ಯೆಗಳು, ಈಜು ತಿಳಿಯದಿರುವುದರಿಂದ ವ್ಯರ್ಥವೇ ಸೈ! ಭಗವಾನನನ್ನು ಸ್ಮರಿಸಿರಿ!"

ಭವಸಾಗರದಿಂದ ಈಜುವ ಭಜನರೂಪೀ ವಿದ್ಯೆಯು ತಿಳಿದಿರದೆ, ಕೇವಲ ಲೌಕಿಕ ವಿದ್ಯೆಗಳ ಪಂಡಿತನಾಗಿ, ಮುಳುಗಿ ಸಾಯಲೇಬೇಕಾಗುತ್ತದೆ.

## ೧೪. ಶಾಂತನೇ ಶುದ್ಧ ವೀರನು

ಪ್ರಸಿದ್ಧ ಬಾದಶಾಹ ಹಾರೂನ--ಅಲ್--ರಶೀದನ ಒಬ್ಬ ಮಗನು, ಒಂದು ದಿನ ತನ್ನ ಪಿತನ ಬಳಿಗೆ ಬಂದು, ಹೀಗಂದನು: "ತಮ್ಮ ಸೇನಾಪತಿಯ ಮಗನು ನನ್ನನ್ನು ಮತ್ತು ನನ್ನ ತಾಯಿಯನ್ನು ಯಥೇಚ್ಛ ಬಯ್ದು, ಮನೆಗೆ ಹೊರಟು ಹೋದನು."

ಹಾರೂನನು ತನ್ನ ಮಂತ್ರಿಗಳೊಡನೆ ಹೀಗೆಂದು ವಿಚಾರಿಸಿದನು:— "ಈ ವ್ಯಾಜ್ಯದಲ್ಲಿ, ಹೇಗೆ ವರ್ತಿಸುವುದು ಉಚಿತ?"

ಒಬ್ಬನು ಅಂದನು: "ಅವನನ್ನು (ಸೇನಾಪತಿಯ ಮಗನನ್ನು) ಕೂಡಲೇ ಕೊಲ್ಲಬೇಕು." ಇನ್ನೊಬ್ಬನಂದನು: "ಆ ದುಷ್ಟನ ನಾಲಿಗೆಯನ್ನು ಕಡಿದು ಬಿಸಾಡಬೇಕು." ಮೂರನೆಯವನಂದನು: "ಅವನನ್ನು ದಂಡಿಸಿ, ದೇಶದಿಂದ ಹೊರಗಟ್ಟಬೇಕು."

ಇದನ್ನೆಲ್ಲ ಕೇಳಿದ ನಂತರ, ಹಾರೂನನು ತನ್ನ ಪುತ್ರನೊಡನೆ ಹೀಗಂದನು: "ಮಗೂ! ನೀನು ಅಪರಾಧಿಯನ್ನು ಕ್ಷಮಿಸುವುದು ಅತ್ಯಂತ

ಉತ್ತಮವಾಗಿದೆ. ಕ್ರೋಧದ ಕಾರಣವು ಉಪಸ್ಥಿತವಾದಾಗಲೇ ಪುರುಷನು ಶಾಂತವಾಗಿದ್ದು ವರ್ತಿಸಬೇಕು; ಅವನೇ ಶುದ್ಧ ವೀರನು. ಆದರೆ, ನಿನ್ನಲ್ಲಿ ಇಂತಹ ಶಕ್ತಿಯಿಲ್ಲದಿದ್ದರೆ, ನೀನು ಸಹ ಅವನನ್ನು ಅದೇ ರೀತಿಯಲ್ಲಿ ಬಯ್ಯಬಹುದು. ಇದು ನಿನಗೆ ಶೋಭಿಸುತ್ತದೆಯೋ?"

********

## ೧೫. ಈಶ್ವರನ ವಿಧಾನದಲ್ಲಿ ವಿಶ್ವಾಸ

ಒಬ್ಬ ಆಂಗ್ಲ ಆಫೀಸರನು, ತನ್ನ ನವವಿವಾಹಿತ ಪತ್ನಿಯೊಡನೆ ಹಡಗಿನಲ್ಲಿ ಸಮುದ್ರ ಯಾತ್ರೆ ಮಾಡುತಿದ್ದನು. ದಾರಿಯಲ್ಲಿ ಭಯಂಕರ ತುಫಾನು ಎದ್ದಿತು. ಯಾತ್ರಿಕರು ಭಯಗ್ರಸ್ತರಾಗಿ ಗಾಬರಿಗೊಂಡರು. ಆದರೆ, ಆ ಆಂಗ್ಲನು ಸ್ವಲ್ಪವಾದರೂ ತಲ್ಲಣಿಸಲಿಲ್ಲ. ಅವನ ನೂತನ ವಧುವೂ ವ್ಯಾಕುಲಗೊಂಡಿದ್ದಳು. ಅವಳು ತನ್ನ ಪತಿಯೊಡನೆ ಪ್ರಶ್ನಿಸಿದಳು: "ಹೇಗೆ ನೀನು ನಿಶ್ಚಿಂತನಾಗಿರುವಿ?"

ಪತ್ನಿಯ ಮಾತನ್ನು ಕೇಳಿ, ಪತಿಯು ಒರೆಯಿಂದ ತಲವಾರನ್ನು ಎಳೆದು ಪತ್ನಿಯ ಶಿರಸ್ಸಿನ ಮೇಲಿಟ್ಟು, ನಗುಮುಖದಿಂದ ಹೀಗೆ ಕೇಳಿದನು: "ಈಗ ನೀನು ಹೆದರುತ್ತಿರುವಿಯಾ? ಅಥವಾ ಇಲ್ಲ?"

ಪತ್ನಿಯು ಅಂದಳು: "ನನ್ನ ಮಾತಿಗೆ ಪ್ರತ್ಯುತ್ತರ ಕೊಡದೆ, ಹೀಗೇಕೆ ಕೇಳುತ್ತಿ? ನಿನ್ನ ಕೈಯೊಳಗೆ ತಲವಾರು ಇರುವುದು ಮತ್ತು ನಾನು ಹೆದರುವುದು—ಇದೆಂಥ ಮಾತು! ನೀನು ನನ್ನ ವೈರಿಯಾಗಿರುತ್ತಿಯೇ? ನೀನು ನನ್ನನ್ನು ನಿನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿರುವೆ!"

ಪತಿಯು ವಿವರಿಸಿದನು: ಪ್ರಿಯೇ, ನನ್ನ ಕೈಯಲ್ಲಿ ತಲವಾರು ಇದ್ದಂತೆಯೇ ಭಗವಾನನ ಕೈಯಲ್ಲಿ ಈ ತುಫಾನು ಇದೆ. ನಾನು ನಿನ್ನ ಮಿತ್ರನೆಂದು ತಿಳಿದು ನೀನು ನನಗೆ ಹೆದರುವುದಿಲ್ಲ. ಹಾಗೆಯೇ ಪರಮಾತ್ಮನು ನನ್ನ ಪರಮ ಮಿತ್ರನೆಂದು ಅರಿತು ನಾನು ಹೆದರುವುದಿಲ್ಲ. ಭಗವಾನನಿಗೆ ನಮ್ಮ ಜೀವಗಳ ಮೇಲೆ ಅಗಾಧವಾದ ಪ್ರೇಮವಿರುತ್ತದೆ. ನಮಗೆ ಕಲ್ಯಾಣಕಾರಿಯಾಗುವುದನ್ನೇ ಅವನು ಮಾಡುವನು. ಆದುದರಿಂದ ಹೆದರಿಕೆ ಏತಕ್ಕೆ? ಯಾರದು?""

********

## ೧೬. ಪ್ರೇಮೋನ್ಮತ್ತತೆ

ಬಹುದಿನಗಳ ನಂತರ ಬಂದ ತನ್ನ ಇನಿಯನಿಗೆ ಭೇಟಿಕೊಡಲು, ಸ್ತ್ರೀಯೊಬ್ಬಳು, ಪ್ರೇಮದಿಂದ ಉನ್ಮತ್ತಳಾಗಿ ಹೋಗುತಿದ್ದಳು. ಅವಳ ದಾರಿಯಲ್ಲಿ, ಪಾಳಯದಲ್ಲಿ, ಬಾದಶಹನು ರತ್ನಗಂಬಳಿ ಹಾಸಿ ನಮಾಜು ಮಾಡುತಿದ್ದನು. ಪ್ರೇಮೋನ್ಮತ್ತಳಾದ ಆ ಸ್ತ್ರೀಗೆ, ದಾರಿಯ—ತಾನು ಎಲ್ಲಿ ನಡೆಯುತ್ತಿರುವೆನೆಂಬುದರ—ಸ್ಮೃತಿಯೇ ಇಲ್ಲದಂತಾಗಿತ್ತು. ಹೋಗುತ್ತ, ಅವಳು ರತ್ನಗಂಬಳಿಯನ್ನು ತುಳಿದೇ ಮುಂದುವರಿದಳು.

ಬಾದಶಹನು ಇದನ್ನು ನೋಡಿ, ಕೋಪಗೊಂಡನು. ಆದರೆ, ನಮಾಜು ಹೇಳುತಿದ್ದುದರಿಂದ, ಆ ವೇಳೆಯಲ್ಲಿ ಏನನ್ನೂ ಹೇಳಲಿಲ್ಲ.

ಸ್ವಲ್ಪ ಸಮಯದ ನಂತರ, ಅವಳು ತನ್ನ ಪ್ರಿಯತಮನೊಡನೆ ಹಿಂದಿರುಗಿದಳು. ಬಾದಶಹನು ಆ ಸ್ತ್ರೀಯನ್ನು ತನ್ನ ಬಳಿಗೆ ಕರೆದು ಹೀಗಂದನು: "ಎಲೇ ಪಾಪಿನಿ! ನಾನು ನಮಾಜು ಹೇಳುವುದನ್ನು ಲಕ್ಷಿಸದೆ, ರತ್ನಗಂಬಳಿಯ ಮೇಲೆ ಕಾಲುಗಳನ್ನಿಟ್ಟು ನೀನು ಹೋದೆ!"

ಪ್ರೇಮಹೃದಯಿಯಾದ ಆ ಸ್ತ್ರೀಯು, ನಿರ್ಭಯತೆಯಿಂದ ಹೀಗಂದಳು: "ರಾಜಾಧಿರಾಜನೇ! ಒಬ್ಬ ಸಾಧಾರಣ ಮನುಷ್ಯನ ಪ್ರೇಮದಿಂದ ಉನ್ಮತ್ತಳಾದುದರಿಂದ ನನಗೆ ನಿನ್ನ ರತ್ನಗಂಬಳಿಯ ಸ್ಮೃತಿಯು ಬರಲಿಲ್ಲ. ಆದರೆ, ಭಗವಾನನನ್ನು ಧ್ಯಾನಿಸುತ್ತಿರುವ ನೀನು ನನ್ನನ್ನು ಹೇಗೆ ನೋಡಿದಿ? ನಿನ್ನ ಮನಸ್ಸಿನಲ್ಲಿ ನೀನು ಕೇವಲ ಬಾಹ್ಯದಿಂದ ನಮಾಜು ಹೇಳುತ್ತಿದ್ದಿಯೆಂದು ನಾನು ತಿಳಿಯಬಹುದೇ? ನಿನ್ನ ಮನಸ್ಸಿನಲ್ಲಿ ಭಗವಾನನು ಇರಲಿಲ್ಲವೆಂಬುದು ಸ್ಪಷ್ಟವೇ ಸರಿ!"

ಈ ಮಾತನ್ನು ಕೇಳಿ, ಬಾದಶಹನು ತನ್ನ ತಪ್ಪನ್ನು ಅರಿತನು; ಮತ್ತು ಆ ಸ್ತ್ರೀಗೆ ಧನ್ಯವಾದವನ್ನರ್ಪಿಸಿದನು.

........

## ೧೭. ಕಷ್ಟದಲ್ಲಿ ಸಹ ಕ್ರೋಧವಿರಬಾರದು

ಇಟಲಿಯ ಒಬ್ಬ ಧರ್ಮಪೂಜಾರಿಗೆ ಬಹುತರ ಕಷ್ಟ ಬಂದೊದಗಿತ್ತು. ಆದರೆ, ಅವನ ಮನಸ್ಸಿನಲ್ಲಿ ಎಂದಾದರೂ ತಾಪವುಂಟಾಗಲಿಲ್ಲ. ಜನರು ಅವನನ್ನು ಬೈಗಳಿಂದ ಅಪಮಾನಿಸುತಿದ್ದಾಗ ಸಹ ಅವನು ನಗುಮುಖ

ದಿಂದ ಸುಮ್ಮನಿರುತಿದ್ದನು; ಮಾತ್ರವಲ್ಲ, ಅವರೊಡನೆ ಮಧುರವಾಗಿಯೇ ಭಾಷಿಸುತಿದ್ದನು.

ಒಮ್ಮೆ ಒಬ್ಬನು ಅವನನ್ನು ಹೀಗೆಂದು ಪ್ರಶ್ನಿಸಿದನು: "ನಿನ್ನಲ್ಲಿ ಇಷ್ಟು ಸಹನಶಕ್ತಿಯು ಎಲ್ಲಿಂದ ಬಂತು?"

ಧರ್ಮಪೂಜಾರಿಯು ಉತ್ತರವಿತ್ತನು: "ನಾನು ಸ್ವರ್ಗ ಸೇರಲಿಚ್ಛಿಸಿ, ಮೇಲೆ ನೋಡಿ ವಿಚಾರಿಸಿರುತ್ತೇನೆ. ಆದುದರಿಂದ ಇಹದ ಯಾವ ವ್ಯವಹಾರದಿಂದಲೂ ನನ್ನ ಮನಸ್ಸನ್ನು ಏಕೆ ಹಾಳುಮಾಡಲಿ? ನನ್ನ ಅಡಿಯಲ್ಲಿ ದೃಷ್ಟಿಯನ್ನು ಬೀರಿದಾಗ, ನನಗೆ ಎದ್ದು ನಿಲ್ಲುವುದಕ್ಕೆ-- ಕುಳಿತುಕೊಳ್ಳುವುದಕ್ಕೆ— ಅಥವಾ ಮಲಗುವುದಕ್ಕೆ ಎಷ್ಟು ಸ್ಥಳವು ಬೇಕಾಗಬಹುದೆಂದು ಸಹಾ ನಾನು ಯೋಚಿಸುತ್ತೇನೆ. ಸುತ್ತಲೂ ನೋಡುವಾಗ, ನನಗಿಂತಲೂ ಅಧಿಕ ಕಷ್ಟಗಳನ್ನು ಅನುಭೋಗಿಸುವ ಜನರನ್ನು ಕಾಣುತ್ತೇನೆ. ಇಷ್ಟು ಸಾಕು. ಈ ವಿಚಾರಗಳಿಂದ ನನ್ನ ಮಸ್ತಿಷ್ಕವು ಶೀತಲವಾಗಿದೆ. ನಾನು ಯಾವ ದುಃಖದಿಂದಲೂ ತಾಪ ಹೊಂದುವುದಿಲ್ಲ.

# ಒಂದಾಣೆ ಮಾಲೆಯ

ಪ್ರಥಮದ ಐದು ಪ್ರಕಟಣೆಗಳು

# ಐದಾಣೆಗಳಿಗೆ

102 ಪುಟಗಳಷ್ಟು ಕೊಟ್ಟಿವೆ.

★

ಆರನೇ ಪ್ರಕಟಣೆಯಲ್ಲಿ

## ಸುಮಾರು **32** ಪುಟಗಳು.

(ಯಾವ ಪ್ರಕಟಣೆಯೂ 16 ಪುಟಗಳಿಗಿಂತ ಕಡಿಮೆಯಿಲ್ಲ.)

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

